# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

'ಮುಂಜಾವು' ಚಂದಾ ದರ
ಆಜೀವ ಚಂದಾ ೨೦೦ ರೂ
ವಾರ್ಷಿಕ ಚಂದಾ ೨೦ ರೂ.
ಬಿಡಿ ಪ್ರತಿ ೪೦ ಪೈಸೆ
ಜಾಹೀರಾತು ದರ
(ಕಾಲಂ ಸೆಂ. ಮಿ.ಗೆ)
ಮುಖಪುಟದಲ್ಲಿ: ೫ ರೂ
ಇತರ ಪುಟಗಳಲ್ಲಿ: ೪ ರೂ.

ಸಂಪುಟ ೧ ಸಂಚಿಕೆ ೪೪ | ಭಾನುವಾರ | ೨೬-೬-೧೯೮೩ | ಕೊಪ್ಪ | ಬೆಲೆ ೪೦ ಪೈಸೆ


## ಹರಿಹರಪುರ ಕಿರಿಯ ಕಾಲೇಜು ವಿವಾದ ಶಾಂತಿಯುತ ಇತ್ಯರ್ಥ

( ವರದಿ: ಹೆಗ್ಗಾರು ಜಯಂತ್)

**ಹರಿಹರಪುರ: ಕಳೆದ ಎರಡೂವರೆ ವರ್ಷಗಳಿಂದ ವಿಚಿತ್ರ ವಿವಾದವೊಂದರ ಸುಳಿಯಲ್ಲಿ ಸಿಕ್ಕಿ ಇನ್ನೇನು ಮುಚ್ಚಿತು ಎಂಬಂತಾಗಿದ್ದ ಇಲ್ಲಿನ ಕಿರಿಯ ಕಾಲೇಜಿನಲ್ಲಿ ಈಗ ವಾತಾವರಣ ತಿಳಿಯಾಗಿದೆ, ವಿವಾದ ಸೌಹಾರ್ದಯುತವಾಗಿ ಬಗೆಹರಿದಿದೆ**

ಸ್ಥಳೀಯ ರೈತ ಸಮಿತಿಯ ಪ್ರಯತ್ನಗಳಿಂದಾಗಿ ಜೂನ್ ೧೮ ರಂದು ನಡೆದ ಸಭೆಯಲ್ಲಿ ಪೋಷಕರ ಕ್ರಿಯಾಸಮಿತಿ, ಸಾರ್ವಜನಿಕರು, ಆಡಳಿತ ಸಂಸ್ಥೆ ಮತ್ತು ಪ್ರೌಢಶಾಲೆಯ ಸಿಬ್ಬಂದಿವರ್ಗ–ಇವರುಗಳ ಪ್ರತಿನಿಧಿಗಳು ಸೇರಿದ್ದು, ಮಾಜಿ ಪ್ರಿನ್ಸಿಪಾಲ್ ವೆಂಕಟರಮಣ ಅಡಿಗ, ಪ್ರೌಢಶಾಲೆ ಮುಖ್ಯೋಪಾಧ್ಯಾಯರಾಗಿದ್ದು ಪ್ರಿನ್ಸಿಪಾಲ್ ಹುದ್ದೆಗೆ ಅರ್ಹತೆ ಪಡೆದ ಬಿ. ಎಸ್. ಸತ್ಯನಾರಾಯಣ, ಪ್ರೌಢಶಾಲೆಯ ಹಿರಿಯ ಉಪಾಧ್ಯಾಯ ಜೆ. ಎಸ್. ಶಿವಶಂಕರ ಭಟ್ ಮುಂತಾದವರು ಭಾಗವಹಿಸಿದ್ದರು. ಎ.ಬಿ. ವಾಸಪ್ಪ ಅಧ್ಯಕ್ಷತೆ ವಹಿಸಿದ್ದರು.

### ಶಾಸಕರ ಮಧ್ಯಸ್ಥಿಕೆಯಲ್ಲಿ ಚರ್ಚೆ, ತೀರ್ಮಾನ

ಶಾಸಕ ಗೋವಿಂದಗೌಡರ ಮಧ್ಯಸ್ಥಿಕೆಯಲ್ಲಿ ನಡೆದ ಚರ್ಚೆಯಲ್ಲಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಳ್ಳಲಾಯಿತು:

೧) ಕಾನೂನು ಪ್ರಕಾರ, ಪ್ರೌಢಶಾಲೆ ಮುಖ್ಯೋಪಾಧ್ಯಾಯರಾಗಿದ್ದ ಬಿ. ಎಸ್. ಸತ್ಯನಾರಾಯಣ ಅವರೇ ಸಂಯುಕ್ತ ಕಿರಿಯ ಕಾಲೇಜಿನ ಪ್ರಿನ್ಸಿಪಾಲರಾಗಿ ಕಾಲೇಜನ್ನು ನಡೆಸಿಕೊಂಡು ಹೋಗುವುದು;

೨) ಅವರು ರಜೆ ಒಂದಿಗೆ ಹೋಗುವಾಗ ಕಾಲೇಜಿನ ಹಿರಿಯ ಉಪನ್ಯಾಸಕರಿಗೆ (ಪ್ರೌಢಶಾಲೆಯ ಹಿರಿಯ ಅಧ್ಯಾಪಕರಿಗಲ್ಲ) ಅಧಿಕಾರ ವಹಿಸುವುದು;

೩) ಯಾವುದೇ ಉಪನ್ಯಾಸಕರನ್ನು ಕೆಲಸದಿಂದ ತೆಗೆಯಕೂಡದು;

೪) ಈ ನಿಬಂಧನೆಗಳ ಅನುಸಾರ ಗೌರವಯುತವಾಗಿ ಕಾಲೇಜು ನಡೆಯುವುದಾದಲ್ಲಿ ಹರಿಹರಪುರ ಮಠದ ಗುರುಗಳು ಹಿಂದಿನಂತೆಯೇ ದೇಣಿಗೆ ಕೊಡುವುದು.

(೪ನೇ ಪುಟಕ್ಕೆ)

## ಪತ್ರಿಕೆಗಳಿಂದ ಬಯಲಾಗುವ ವಿಷಯಗಳ ಬಗ್ಗೆ ಕ್ರಮಕ್ಕೆ 'ಬೆನ್ನು ಹತ್ತಲು' ಪ॥ಸಂಘದ ನಿರ್ಣಯ

ತರೀಕೆರೆ: ಪತ್ರಿಕೆಗಳಲ್ಲಿ ಎಷ್ಟೋ ಕುಂದುಕೊರತೆಗಳ ವರದಿಗಳು, ಪತ್ರಗಳು, ಅಪಾದನೆಗಳು ಪ್ರಕಟವಾಗುತ್ತವೆ. ಆದರೆ ಅವುಗಳ ಬಗ್ಗೆ ಸಂಬಂಧಪಟ್ಟವರು ಎಷ್ಟೋ ಸಲ ಕ್ರಮ ಕೈಗೊಳ್ಳುವುದಿಲ್ಲ. ಪತ್ರಿಕೆಗಳಲ್ಲಿ ಪ್ರಕಟಿಸುವ ಉದ್ದೇಶವೇ ಸಮಸ್ಯೆ ಬಗೆಹರಿಯಬೇಕೆಂಬುದಾದ್ದರಿಂದ ಇಂಥವುಗಳ ಬಗ್ಗೆ ಸಂಬಂಧಪಟ್ಟ ಇಲಾಖೆಗಳು ಅಥವಾ ವ್ಯಕ್ತಿಗಳು ಕ್ರಮ ತೆಗೆದುಕೊಳ್ಳುವಂತೆ ಮಾಡುವುದಕ್ಕಾಗಿ ಚಿಕ್ಕಮಗಳೂರು ಜಿಲ್ಲಾ ಪತ್ರಕರ್ತರ ಸಂಘ ಹೊಸ ಕ್ರಮವೊಂದನ್ನು ರೂಪಿಸಿದೆ.

ಜಿಲ್ಲೆಯ ಪತ್ರಿಕೆಗಳವರು ಪ್ರಕಟಿತವಾದ ವರದಿಗಳ ಪ್ರತಿಗಳನ್ನು ಸಂಘದ ಕಾರ್ಯದರ್ಶಿಗೆ ಕಳಿಸಬೇಕು. ಅವರು ಯಾವ ವರದಿ ಯಾವ ಇಲಾಖೆಗೆ ಸಂಬಂಧಪಟ್ಟದ್ದು ಎಂಬುದನ್ನು ಗುರುತಿಸಿ, ಅಲ್ಲಿನ ಮುಖ್ಯಸ್ಥರಿಗೆ ಒಂದು ಪತ್ರ ಬರೆದು ವರದಿಯ ಒಂದು ಪ್ರತಿಯನ್ನು ಕಳಿಸಿ ಕ್ರಮ ತೆಗೆದುಕೊಳ್ಳಲು ಒತ್ತಾಯಿಸುತ್ತಾರೆ.

ಈ ವಿಧಾನದಿಂದ ಹಲವು ಸಮಸ್ಯೆಗಳು ಬಗೆಹರಿಯಲು ಸಾಧ್ಯವಾಗುವುದೆಂದು ಪತ್ರಕರ್ತರ ಸಂಘ ಆಶಿಸಿದೆ.

### ಉತ್ತಮ ವರದಿಗೆ ಬಹುಮಾನ

ವರ್ಷದ ಅತ್ಯುತ್ತಮ ತನಿಖಾ ವರದಿಗೆ ಬಹುಮಾನ ಕೊಡುವ ಯೋಜನೆಯನ್ನೂ ಸಂಘ ರೂಪಿಸಿದ್ದು, ಈ ಬಗ್ಗೆ ಮೂರು ಸದಸ್ಯರ ಸಮಿತಿಯೊಂದನ್ನು ನೇಮಿಸಿದೆ.

## ಕಲ್ಲುಗುಡ್ಡೆಗೆ ಶಾಸಕರ ಭೇಟಿ ಕಾರ್ಯಕ್ರಮ

ಬಸರಿಕಟ್ಟೆ: ಇಲ್ಲಿಗೆ ಸಮೀಪದ ಕಲ್ಲುಗುಡ್ಡೆ ಗ್ರಾಮಕ್ಕೆ ಜೂನ್ ೨೬ ರಂದು ಶಾಸಕ ಗೋವಿಂದಗೌಡರು ಭೇಟಿ ಕೊಡಲಿದ್ದಾರೆ. ಗ್ರಾಮದ ಹಲವೆಡೆ ಸಂಚರಿಸಿ, ವಿವಿಧ ಸಮಸ್ಯೆಗಳನ್ನು ಕಣ್ಣಾರೆ ನೋಡಿ, ಅನಂತರ ಸಂಜೆ ನಡೆಯುವ ಬಹಿರಂಗ ಸಭೆಯಲ್ಲಿ ಈ ಸಮಸ್ಯೆಗಳ ಬಗ್ಗೆ ತಾವು ಯೋಚಿಸಿರುವ ನಿವಾರಣೋಪಾಯಗಳನ್ನು ಸಾರ್ವಜನಿಕರಿಗೆ ವಿವರಿಸಲಿದ್ದಾರೆಂದು ಕಲ್ಲುಗುಡ್ಡೆಯ ವಿವೇಕಾನಂದ ಯುವಕ ರೈತ ಸಂಘದ ಅಧ್ಯಕ್ಷರು ತಿಳಿಸಿದ್ದಾರೆ.

## ಶೃಂಗೇರಿ ಬಳಿ ಮತ್ತೆ ಗಂಧ ವಶ

ಶೃಂಗೇರಿ: ಕೆರೆಕಟ್ಟೆ ಬಳಿ ದ. ಕನ್ನಡ ಜಿಲ್ಲೆ ಗಡಿಯ ಅರಣ್ಯ ತನಿಖಾ ಘಟಕದ ಬಳಿ ಗಂಧ ತುಂಬಿಕೊಂಡು ಹೋಗುತ್ತಿದ್ದ ಎಂಇಎಕ್ಸ್ ೬೦೨೪ ಕಾರನ್ನು ಹಿಡಿದು ಸುಮಾರು ೨೦ ಸಾವಿರ ರೂ. ಬೆಲೆಯ ೩೬೦ ಕಿಲೊ ಗಂಧವನ್ನು ವಲಯ ಅರಣ್ಯಾಧಿಕಾರಿ ಸೂರ್ಯಾಚಾರ್ ಮತ್ತು ಅರಣ್ಯಾಧಿಕಾರಿ ರಮಾನಂದರೈ ತಮ್ಮ ಸಿಬ್ಬಂದಿಯೊಂದಿಗೆ ವಶಪಡಿಸಿಕೊಂಡಿದ್ದಾರೆ. ಗುಪ್ತ ಮಾಹಿತಿಯ ನೆರವಿನಿಂದ ಸಿಬ್ಬಂದಿ ದಾಳಿ ನಡೆಸಿದಾಗ ದುಷ್ಕರ್ಮಿಗಳು ಪರಾರಿಯಾದರೆನ್ನಲಾಗಿದೆ.

## ಒಂದು ಭೂ ವಿವಾದದ ಕಥೆ

ವರದಿ: ಮಾ.ಕೆ.ನ.

ಜಯಪುರ: ಇಲ್ಲಿಗೆ ಸಮೀಪದ ಲೋಕನಾಥಪುರದ ಪಾಳ್ಯದಮಕ್ಕಿಯಲ್ಲಿ ಮೇ ೩೧ ರಂದು ಸುಮಾರು ೧೫೦ ಜನರು ಸಿದ್ದು ಪೂಜಾರಿ ಎಂಬವರು ಬೆಳೆದಿದ್ದ ಭತ್ತವನ್ನು ಬಲವಂತವಾಗಿ ಕೊಯ್ದು ಪ್ರಭಾಕರ ಎಂಬವರ ಮನೆಗೆ ಸಾಗಿಸಿದ್ದಾಗಿಯೂ, ಹಳೆಯ ಭೂ ವಿವಾದವೊಂದು ಘರ್ಷಣೆಯ ಹಂತಕ್ಕೆ ತಲುಪಿರುವುದಾಗಿಯೂ ಪತ್ರಿಕೆಗಳಲ್ಲಿ ವರದಿಯಾಯಿತು. ಈ ಘಟನೆಯ ವಿವರಗಳನ್ನು ತಿಳಿಯಲು 'ಮುಂಜಾವು' ಪ್ರತಿನಿಧಿ ಆ ಪ್ರದೇಶದಲ್ಲಿ ವ್ಯಾಪಕವಾಗಿ ಸುತ್ತಾಡಿದಾಗ ಗ್ರಾಮದ ಪ್ರತಿಯೊಬ್ಬರೂ ಎರಡಲ್ಲೊಂದು ಪಕ್ಷಕ್ಕೆ ಪರವಾಗಿ ಮಾತಾಡುವುದು ಕಂಡುಬಂತು. ಹಲವಾರು ಜನರನ್ನು ಮಾತಾಡಿಸಿದಾಗ ಮೂಡುವ ಚಿತ್ರ ಹೀಗಿದೆ—

### ವಿವಾದ

ಪಾಳ್ಯದಮಕ್ಕಿಯ ಸ. ನಂ. ೧೩೬ ರ ೫ ಎಕರೆ ೨೧ ಗುಂಟೆ ಜಮೀನು ಮೂಲತಃ ಅಲ್ಲಿನ ಶಿವಪಂಚಾಯತನ ದೇವಸ್ಥಾನದ್ದು. ಅಲ್ಲಿನ ಅರ್ಚಕರಲ್ಲೊಬ್ಬರಾದ ಅನಂತಪದ್ಮನಾಭ ಶಾಸ್ತ್ರಿ ಎಂಬವರಿಗೆ ಅದರ ಗೇಣಿ ಹಕ್ಕಿದ್ದು, ಅವರು ಸಿದ್ದುಪೂಜಾರಿ ಎಂಬವರಿಗೆ ಒಳಗೇಣಿಗೆ (ದಾಖಲೆರಹಿತವಾಗಿ) ಕೊಟ್ಟಿದ್ದರೆಂದು ಹೇಳಲಾಗಿದೆ. [ಕೊಟ್ಟಿರಲಿಲ್ಲ; ತಾವೇ ಸಾಗುವಳಿ ಮಾಡಿಸುತ್ತಿದ್ದೆವೆಂದು ಶಾಸ್ತ್ರಿಗಳು ಹೇಳುತ್ತಾರೆ. ಆದರೆ, ಅವರುಗಳ ಮನೆಗಳು ಹೋಲಿಕೆಯ 'ಅಡಿಗೆ' ಜಮೀನು ಈಚೆಗೂ ಇದ್ದು, ಸುಮಾರು ೩೦-೪೦ ವರ್ಷಗಳಿಂದಲೂ ಸಿದ್ದುಪೂಜಾರಿಯೇ ಸಾಗುವಳಿ ಮಾಡುತ್ತಿದ್ದರು; ಅದರೆ ಕೆಲವು ವರ್ಷ ಅವರಿಗೇ ವಹಿಸುತ್ತಿದ್ದರು. ಕೆಲವು ವರ್ಷ ತಾವೇ ಮಾಡಿಸುತ್ತಿದ್ದರು. ಅಂತೂ ಪೂರ್ತಿ ಜಮೀನನ್ನು 'ಗೇಣಿಗೆ' ಎಂದು ಕೊಟ್ಟಿರಲಿಲ್ಲ–ಎಂದು ಊರಿನ ಕೆಲವರು ಹೇಳುತ್ತಾರೆ.]

ಭೂ ಸುಧಾರಣಾ ಕಾನೂನು ಪ್ರಕಾರ ಇನಾಂ ಭೂಮಿ ಬಗ್ಗೆ ಹಾಕಿದ್ದ ವಿಶೇಷ ಭೂ ನ್ಯಾಯ ಮಂಡಳಿಗೆ ಡಿಕ್ಲರೇಷನ್

(೪ನೇ ಪುಟಕ್ಕೆ)

## ಮಳೆ ಕಾರಣ ಶೃಂಗೇರಿ ಕ್ಷೇತ್ರದಲ್ಲಿ ಪುರಸಭೆಗಳ ಚುನಾವಣೆ ಮುಂದಕ್ಕೆ

ಶೃಂಗೇರಿ: ಈ ಕ್ಷೇತ್ರದ ಮೂರೂ ಪುರಸಭೆಗಳ ಚುನಾವಣೆಯನ್ನು ಮಳೆಗಾಲದ ಕಾರಣ ಮುಂದಕ್ಕೆ ಹಾಕಲಾಗಿದ್ದು, ಸೆಪ್ಟೆಂಬರ್ ಸುಮಾರಿಗೆ ಚುನಾವಣೆ ನಡೆಯುವ ನಿರೀಕ್ಷೆಯಿದೆ.

ಇದೇ ರೀತಿ ದ.ಕನ್ನಡ, ಉ. ಕನ್ನಡ ಮತ್ತು ಕೊಡಗು ಜಿಲ್ಲೆಯ ಎಲ್ಲಾ ಪುರಸಭೆಗಳಿಗೂ ಹಾಗೂ ಸಕಲೇಶಪುರ, ಮೂಡಿಗೆರೆ, ಸಾಗರ, ಸೊರಬ, ತೀರ್ಥಹಳ್ಳಿ, ಹೊಸನಗರ ಪುರಸಭೆಗಳಿಗೂ ಸಹ ಚುನಾವಣೆ ಮುಂದಕ್ಕೆ ಹೋಗಿದೆ. ಉಳಿದ ಪುರಸಭೆಗಳಿಗೆ ಜುಲೈ ೩೧ ರಂದು ಹಾಗೂ ನಗರ ಕಾರ್ಪೊರೇಷನ್‌ಗಳಿಗೆ ಆಗಸ್ಟ್ ೮ ರಂದು ಚುನಾವಣೆಗಳು ನಡೆಯುತ್ತವೆ.

## ಅಪರಿಚಿತ ಶವ ಪತ್ತೆ

ಕೊಪ್ಪ: ಕೊಪ್ಪ-ಜಯಪುರ ಮಾರ್ಗದಲ್ಲಿರುವ ತೆಂಗಿನಮನೆಯಲ್ಲಿ ಜೂನ್ ೩ನೇ ತಾರೀಖಿಗೆ ಕೊಳೆತ ಸ್ಥಿತಿಯಲ್ಲಿದ್ದ ಅಪರಿಚಿತ ಶವವೊಂದು ಕಂಡುಬಂದಿದ್ದು ಕೊಪ್ಪ ಪೊಲೀಸರು ತನಿಖೆ ನಡೆಸುತ್ತಿದ್ದಾರೆ.

### ನರಸಿಂಹರಾಜಪುರ ಕಿರಿಯ ಕಾಲೇಜು ಪಿ.ಯು.ಸಿ. ಫಲಿತಾಂಶ

ಇಲ್ಲಿನ ಸರ್ಕಾರಿ ಕಿರಿಯ ಕಾಲೇಜಿನಲ್ಲಿ ಪಿಯುಸಿ ಪರೀಕ್ಷೆಗೆ ಕುಳಿತಿದ್ದ ೬೫ ವಿದ್ಯಾರ್ಥಿಗಳ ಪೈಕಿ ೩೦ ಮಂದಿ ತೇರ್ಗಡೆಯಾಗಿದ್ದು, ೪ ಜನ ಪ್ರಥಮ ಶ್ರೇಣಿ ಪಡೆದಿದ್ದಾರೆ. ಫಲಿತಾಂಶ ಶೇ. ೪೬.

'ಮುಂಜಾವು' ತಪ್ಪದೆ ಓದಿರಿ

# ದೇವಯ್ಯ ಹರವೆ ಇನ್ನಿಲ್ಲ

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ರೀಡರ್ ಆಗಿದ್ದ ಶ್ರೀಯುತ ದೇವಯ್ಯಹರವೆ ತಮ್ಮ ಕೇವಲ ೩೦ನೇ ವಯಸ್ಸಿನಲ್ಲಿ ಜೂನ್ ೧೯ರಂದು ಮೈಸೂರಿನಲ್ಲಿ ನಿಧನರಾಗಿದ್ದಾರೆ. ರಾಜ್ಯದ ಬಂಡಾಯ ಸಾಹಿತ್ಯ ಸಂಘಟನೆಯ ಸಂಚಾಲಕರಾಗಿದ್ದ ಅವರು ದಲಿತಸಂಘರ್ಷಸಮಿತಿಯ ಆಧಾರಸ್ತಂಭಗಳಲ್ಲೂ ಒಬ್ಬರಾಗಿದ್ದರು, ಈಚೆಗೆ ಹೆಚ್ಚುತ್ತಿರುವ ಆಕ್ರೋಶದ, ಅತಿರಂಜಿತವಾದ ಬರಹಗಳ ಮಧ್ಯೆ, ದಲಿತ ವರ್ಗದ ತನ್ನೆಲ್ಲ ಆಕ್ರೋಶವನ್ನೂ ಎದೆಯಲ್ಲಿ ತುಂಬಿಸಿಕೊಂಡು ಅನುಭವಿಸುತ್ತಿದ್ದೂ ಸ್ಥಿಮಿತ ಕಳೆದುಕೊಳ್ಳದೆ, ಶಾಂತವಾಗಿ, ಸುಸಂಬದ್ಧವಾಗಿ ಆಲೋಚನೆ-ಬರವಣಿಗೆ ಮಾಡುತ್ತಿದ್ದ ದೇವಯ್ಯ, ದಲಿತರಲ್ಲಿ ಮೂಡುತ್ತಿರುವ ಆತ್ಮಾಭಿಮಾನದ, ಪ್ರಜ್ಞೆಯ ಒಂದು ಉದಾಹರಣೆಯಂತಿದ್ದರು.

ವೈಯಕ್ತಿಕವಾಗಿ ನನ್ನ ಮತ್ತು ನನ್ನ ಪತ್ರಿಕೆಯ ಹಿತೈಷಿಗಳಾಗಿದ್ದ ಶ್ರೀಯುತರ ಮರಣದಿಂದ ನನಗಾದ ದುಃಖ ಪದಗಳಿಗೆ ಸಿಗುವಂಥದಲ್ಲ.

—ಸಿರಿಮನೆ ನಾಗರಾಜ್

## ಜಯಪುರ ಕಾಫಿ ಬೋರ್ಡ್: "ಪಾವತಿ ವ್ಯವಸ್ಥೆ ಬದಲಾಯಿಸಿ"

ಕಾಫಿ ಸಣ್ಣ ಬೆಳೆಗಾರರ ಅನುಕೂಲಕ್ಕಾಗಿ ಕಾಫಿ ಬೋರ್ಡ್‌ನವರು ಜಯಪುರದಲ್ಲಿ ಒಂದು ಕಾಫಿ ಡಿಪೋ ತೆರೆದಿರುವುದು ಸರಿಯಷ್ಟೆ. ಈ ಡಿಪೋಗೆ ಕೊಪ್ಪ ಮತ್ತು ಶೃಂಗೇರಿ ತಾಲ್ಲೂಕುಗಳ ಸುಮಾರು ೫೦೦ ಜನ ಕಾಫಿಯನ್ನು ಹಾಕುತ್ತಾರೆ.

ಮೊದಲು ಡಿಪೋದಲ್ಲಿ ನಮ್ಮ ಕಾಫಿಯ ಬೆಲೆ ಮತ್ತು ಬೋನಸ್ ಹಣವನ್ನು ನಗದಾಗಿ ಪಾವತಿಸುತ್ತಿದ್ದರು. ಆದರೆ ಈ ಸಾಲಿನಲ್ಲಿ ಕರ್ನಾಟಕ ಬ್ಯಾಂಕ್‌ನ "ಅಕೌಂಟ್ ಪೇಯೀ" ಚೆಕ್‌ನ್ನು ಕೊಡುತ್ತಾರೆ. ಇದರಿಂದ ಸಣ್ಣ ರೈತರಿಗೆ ಬಹಳ ತೊಂದರೆಯಾಗಿದೆ. ಹೇಗೆಂದರೆ ೫೦ ರೂ. ಕಟ್ಟಿ ಉಳಿತಾಯ ಖಾತೆ ತೆರೆಯಲು ಬ್ಯಾಂಕಿನವರು ತಿಳಿಸುತ್ತಾರೆ. ಚೆಕ್ ಬಟವಾಡೆ ಆಗಿ ಬರಲು ಒಂದು ವಾರವಾಗುತ್ತೆ. 'ಡಿಸ್ಕೌಂಟ್' ಮಾಡಿದರೆ ೮ ರೂ. ಖರ್ಚಾಗುತ್ತೆ. ಕೆಲವು ಸಾರಿ ಬೋನಸ್ ಬಂದ ಹಣ ಇದಕ್ಕೆ ಸರಿಯಾಗುತ್ತೆ. ಇದಲ್ಲದೆ ಈ ಚೆಕ್ ತರಲು ತಿರುಗಾಟಕ್ಕೆ ಕಡಿಮೆಯೆಂದರೆ ೧೦ ರೂ. ಖರ್ಚಾಗುತ್ತೆ.

ಆದ್ದರಿಂದ ಈ ಕ್ರಮವನ್ನು ತೆಗೆದು ಮೊದಲಿನ ಕ್ರಮವನ್ನೇ ತರಬೇಕಾಗಿ ಕೇಳಿಕೊಳ್ಳುತ್ತೇನೆ. ಅಲ್ಲದೆ ರೈತರಿಗೆ ಬರುವ ಬೋನಸ್ ಹಣವನ್ನು ಅವರ ಹತ್ತಿರದ ಬ್ಯಾಂಕಿಗೆ ಜಮಾ ಮಾಡಿದರೆ ಅನಾವಶ್ಯಕ ಖರ್ಚುಗಳು ಉಳಿಯುತ್ತವೆ. ಇದನ್ನು ಮನಗಂಡು ಕಾಫಿ ಬೋರ್ಡಿನವರು ರೈತರಿಗೆ ಅನುಕೂಲ ಮಾಡುತ್ತಾರೆಂದು ನಂಬಿದ್ದೇನೆ.

ಕೆ.ಎಸ್.ವೆಂಕಟೇಶ್, ಕಮ್ಮಾರನಳ್ಳಿ.

## ....ಉಳಿದ ಸಮಸ್ಯೆಗಳು

(೧ನೇ ಪುಟದಿಂದ)

ಒಟ್ಟಿನಲ್ಲಿ, ಜಿಲ್ಲೆಯ ಸಮಸ್ಯೆಗಳಿಗೆ ತಲೆ ಕೊಡುವ ಜವಾಬ್ದಾರಿಯೂ ಈ ಮಂತ್ರಿಯ ಮೇಲೆ ಇರುವುದರಿಂದ ಕ್ಷೇತ್ರದ ಕೆಲವು ಅತಿ ಮುಖ್ಯ ಸಮಸ್ಯೆಗಳನ್ನು ಅವರಿಗೆ ಖುದ್ದಾಗಿ ಪರಿಚಯ ಮಾಡಿಕೊಡಲು ಪ್ರಯತ್ನ ಮಾಡಿದೆ. ಆದರೆ ಅದು ಕಾಲು ಭಾಗ ಕೂಲಿಸಲಿಲ್ಲ. ಅವರು ಗಮನಕ್ಕೆ ಸೆಗೆದ ಕೊಂಡ ಸಮಸ್ಯೆಗಳ ಬಗ್ಗೆಯೂ ಸಹ ಕಳಕಳಿಯಿಂದ ಮನಸ್ಸು ಕೊಡುತ್ತಾರೆ ಎನ್ನಿಸಲಿಲ್ಲ. ಒಟ್ಟಿನಲ್ಲಿ ಸಚಿವರ ಭೇಟಿಗಾಗಿ ಕಳೆದ ಸುಮಾರು ೩ ಗಂಟೆ ಹೆಚ್ಚು-ಕಮ್ಮಿ ದಂಡವೇ ಆಯಿತು ಎನ್ನಿಸಿತು ಪ್ರೆಸ್ಸಿಗೆ ವಾಪ್ಸು ಬಂದಾಗ.

—ಸಂಪಾದಕ.

## 'ವಿದ್ಯುದ್ದೀಪದ ಸೌಕರ್ಯವಿಲ್ಲ'

ಶೃಂಗೇರಿ ತಾಲ್ಲೋಕು ಕೆಳಕೊಪ್ಪ ಗ್ರಾಮದ ಸುತ್ತಮುತ್ತಲು ದೇಶಕ್ಕೆ ಸ್ವಾತಂತ್ರ ಬಂದು ೩೬ ವರ್ಷವಾದರೂ ವಿದ್ಯುದ್ದೀಪ ಬಂದಿಲ್ಲ. ಈ ಗ್ರಾಮದ ಜನರು ವಿದ್ಯುತ್ತನ್ನು ಗ್ರಾಮಕ್ಕೆ ತರಲು ತುಂಬಾ ಶ್ರಮಪಟ್ಟ ಆಗಳೆ ಮೂಕ ಪ್ರೇಕ್ಷಕರಾಗಿದ್ದಾರೆ. ಜನರ ಈ ತೊಂದರೆಯನ್ನು ನಿವಾರಿಸಲು ನಮ್ಮ ಹೊಸ ಶಾಸಕರಾದ ಶ್ರೀ ಹೆಚ್.ಜಿ. ಗೋವಿಂದಗೌಡರು ಕ್ರಮ ಕೈಗೊಳ್ಳಲೆಂದು ಆಶಿಸುತ್ತೇನೆ.

ಹಳ್ಳಿಯ ಜನರ ಪರವಾಗಿ,

ಸಿ.ಎಂ. ಪುಂಡರೀಕ, ಚಿದ್ರವಳ್ಳಿ.

## ಯುವ ಕವಿಗಳಿಗೆ ಆಹ್ವಾನ

ಶಿಕಾರಿಪುರ: ಹೊಸ ಬರಹಗಾರರನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ರಾಜ್ಯೋತ್ಸವ ಸಂದರ್ಭದಲ್ಲಿ ನೂರು ಕವಿಗಳ ನೂರು ಕವನಗಳ ಸಂಕಲನವನ್ನು "ಶತಮಾನ" ಎಂಬ ಹೆಸರಿನಲ್ಲಿ ಹೊರತರಲು ನಿರ್ಧರಿಸಲಾಗಿದೆ. ಆಸಕ್ತಿಯುಳ್ಳವರು ಹೆಚ್ಚಿನ ವಿವರಗಳಿಗಾಗಿ ೫೦ ಪೈಸೆ ಅಂಚೆ ಚೀಟಿಯಿಟ್ಟು ಈ ಕೆಳಗಿನ ವಿಳಾಸಕ್ಕೆ ಬರೆದುಕೊಳ್ಳಬಹುದು: ಜೈಸು ಪ್ರಕಾಶನ, ಚಂಪಾ ಕಟ್ಟಡ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ.

## ಮಧ್ಯಮಾವಧಿ ಸಾಲ ಸಕಾಲದಲ್ಲಿ ಪಾವತಿಸಿದ್ದರೆ ಬಡ್ಡಿ ರಿಯಾಯಿತಿ

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಅನ್ವಯ ಸಹಕಾರ ಸಂಘಗಳ ಮೂಲಕ ಮಧ್ಯಮಾವಧಿ ಸಾಲ ಪಡೆದ ಪ್ರಯೋಜನದಾರರು ಸಕಾಲದಲ್ಲಿ ಕಂತನ್ನು ಪಾವತಿ ಮಾಡಿದ್ದಲ್ಲಿ, ಅಂತಹ ಪ್ರಯೋಜನದಾರರಿಗೆ ವಿಶೇಷ ಬಡ್ಡಿ ರಿಯಾಯಿತಿಯನ್ನು ಸಹಾಯಧನದ ಮೂಲಕ ನೀಡಲಾಗುವುದು. ಚಿಕ್ಕಮಗಳೂರು ಜಿಲ್ಲೆಗೆ ಸಹಾಯಧನ ರೂಪದಲ್ಲಿ ೬೫,೦೦೦ ರೂಪಾಯಿಗಳು ಮಂಜೂರಾಗಿದ್ದು ಪ್ರಯೋಜನದಾರರು ಸಕಾಲದಲ್ಲಿ ಸಂಬಂಧಪಟ್ಟ ಸಹಕಾರ ಸಂಘಕ್ಕೆ ಪಾವತಿಮಾಡಿ ಪ್ರಯೋಜನ ಪಡೆಯಬೇಕಾಗಿ ಕೇಳಿಕೊಳ್ಳಲಾಗಿದೆ.

-ಮ.ರಾ. ದೀಪಕ್ ರಾಜ್,
ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಮಗಳೂರು.

## ಓದುಗರ ಪತ್ರಗಳು

### ಎ. ಪಿ. ಎಂ. ಸಿ. ಚುನಾವಣೆ ವರದಿ: ಕೆ. ಎಚ್. ವೀರಪ್ಪಗೌಡರ ಪ್ರತಿಕ್ರಿಯೆ

'ಮುಂಜಾವು' ಸಂಪಾದಕರಿಗೆ,

ತಾ ೧೫-೬-೮೩ರ ನಿಮ್ಮ ಪತ್ರಿಕೆಯಲ್ಲಿ ಎ.ಪಿ.ಎಂ.ಸಿ. ಚುನಾವಣೆ ವಿಷಯ ಅಚ್ಚಾಗಿದೆ. ಅದರ ನಿಜಾಂಶ ಈ ಕೆಳಗೆ ಕಂಡತೆ ಇರುವುದನ್ನು ಪ್ರಚುರ ಪಡಿಸುವರಾಗಿ ನಂಬಿರುತ್ತೇನೆ.

ಇದು ಹಿಂದೆ ಆರ್.ಎಂ.ಸಿ. ಎಂದು ಪ್ರಾರಂಭವಾಗಿ ನಾಮಿನೇಶನ್ ಮೂಲಕ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯ್ತು. ನಂತರ ೧೯೫೩ರ ಚುನಾವಣೆ ನಡೆದು ನಾನು ಜಯಗಳಿಸಿದೆ. ಆನಂತರ ಚುನಾವಣೆ ಬಂದಾಗ ನಾನೂ ಅರ್ಜಿ ಹಾಕಿ, ಶ್ರೀ ಹಾಲಪ್ಪಗೌಡರೂ ಅರ್ಜಿಹಾಕಿದಾಗ ನಾನು ವಾಪಾಸ್ ತೆಗೆದುಕೊಂಡು ಅವರ ಅವಿರೋಧ ಆಯ್ಕೆಗೆ ಸಹಾಯ ಮಾಡಿದೆ. ಅವರು ನಾಲ್ಕೈದು ವರ್ಷ ಸದಸ್ಯರಾಗಿ ಇದ್ದರು. ಸರ್ಕಾರದ ಉದ್ದೇಶ ರೈತರೇ ಛೇರ್‌ಮನ್ನರಾಗಬೇಕೆಂದಿದ್ದು ೯ ರೈತ ಪ್ರತಿನಿಧಿ, ೩ ವ್ಯಾಪಾರಸ್ಥರ ಪ್ರತಿನಿಧಿಯಿಂದ ಕೂಡಿದ್ದು ಇವರ ಕಾಲದಲ್ಲಿ ಪ್ರಥಮ ಖಾಸಗಿ ಅಧ್ಯಕ್ಷರಿಗೆ ಸೇರವಾಯಿತು. ಆದರೆ ಆದರೆ ಇವರು ಭಾಗಿಯಾಗದ್ದರಿಂದ ವ್ಯಾಪಾರಸ್ಥರೇ ಛೇರ್‌ಮನ್ ಆದರು. ಇದರಿಂದ ರೈತರ ಹಿತಸಾಧನೆಗೆ ಅಡಚಣೆಯಾಗಿದ್ದಲ್ಲದೆ, ಇವರು ಸದಸ್ಯರೆಂಬ ವಿಷಯ ರೈತರಿಗೆ ಅರಿವೇ ಇಲ್ಲದಂತಾಯಿತು. ಪುನಃ ಚುನಾವಣೆ ಬಂದಾಗ ನಾನು ಅರ್ಜಿ ಹಾಕಿದೆ. ಬೇರೆ ಯಾರೂ ಹಾಕಲಿಲ್ಲ. ಸರ್ಕಾರದವರು ವ್ಯಾಪಾರಸ್ಥರನ್ನೇ ಛೇರ್‌ಮನ್ ಮಾಡಿದ ಪ್ರಸಂಗದಿಂದ ಕಾನೂನು ತಿದ್ದುಪಡಿಮಾಡಿ, ವ್ಯಾಪಾರಸ್ಥರು ಛೇರ್‌ಮನ್ ಆಗದಂತೆ ಮಾಡಿದರು. ಇದು ನಡೆದ ವಿಷಯ.

ನಾನು ಸದಸ್ಯನಾಗಿದ್ದಾಗ ನೀತಿ ಪಾಲಿಸದೆ ಇದ್ದ ವ್ಯಾಪಾರಸ್ಥರ ಮೇಲೆ ಕ್ರಮತೆಗೆದು ಕೊಳ್ಳಲು ಒತ್ತಾಯಿಸಿ, ಕ್ರಮ ತೆಗೆದುಕೊಂಡೆವು. ಇದರಿಂದ ಕುಪಿತಗೊಂಡ ಕೆಲವು ವರ್ತಕರು, ನಾನು ಬರದಂತೆ ಮಾಡಲು ೧೯೮೦ ರಲ್ಲಿ ಚುನಾವಣೆ ವೇಳಾಪಟ್ಟಿ ಹಾಕಿದಾಗ ಪ್ರಯತ್ನಿಸಿದರು. ಚುನಾವಣೆ ಮುಂದೆ ಹೋಗಿ ಈಗ ಪುನ. ನಡೆಯುತ್ತಿದೆ ನಾನು ಹಾಕಿದ ನಂತರ ಶ್ರೀ ಹಾಲಪ್ಪಗೌಡರು ಅರ್ಜಿ ಹಾಕಿದ್ದಾರೆ.

ಆದ್ದರಿಂದ "ವೀರಪ್ಪಗೌಡರು ಸದರಿ ಮಾರುಕಟ್ಟೆ ಪ್ರಾರಂಭದಿಂದಲೂ ಇದ್ದಾರೆ" ಎಂಬುದು ಸರಿಯಲ್ಲ. ಜನರು ಯಾರು ದಿಟ್ಟತನದಿಂದ, ಅನುಭವದಿಂದ, ಹೋರಾಡು

(೧ನೇ ಪುಟಕ್ಕೆ)

## ಕೊಪ್ಪ ತಾಲ್ಲೂಕು ಅಭಿವೃದ್ಧಿ ಮಂಡಳಿಯ ೫ ವರ್ಷಗಳ ಸಾಧನೆಯ ಪಕ್ಷಿನೋಟ

| ಕಾರ್ಯಕ್ರಮ | 1978-79 ರಿಂದ 82-83ರವರೆಗೆ ಸಾಧನೆ | 1983-84ಕ್ಕೆ ಗುರಿ |
|---|---|---|
| **ಕುಡಿಯುವ ನೀರಿನ ಬಾವಿಗಳು** | | |
| 1) ಸಾಮಾನ್ಯ ಯೋಜನೆ | 180 | 35 |
| 2) ಗಿರಿಜನ ಅಭಿವೃದ್ಧಿ ಯೋಜನೆ | 11 | 2 |
| **ಜನತಾ ಮನೆ ಯೋಜನೆ** | | |
| 1) ಸಾಮಾನ್ಯ ಯೋಜನೆ | 2415 | 500 |
| 2) ಗಿರಿಜನ ಅಭಿವೃದ್ಧಿ ಯೋಜನೆ | 314 | 50 |
| **ಶಾಲಾ ಕೊಠಡಿಗಳು** | | |
| 1) ಸಾಮಾನ್ಯ ಯೋಜನೆ | 11 | 8 |
| 2) ವಿಶೇಷ ಘಟಕ ಯೋಜನೆ | 4 | 2 |
| 3) ಗಿರಿಜನ ಅಭಿವೃದ್ಧಿ ಯೋಜನೆ | 12 | 4 |
| **ಜ್ಞಾನ ಮಂದಿರಗಳು — ಕಟ್ಟಡಗಳು** | 4 | – |
| **ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ** | 1,787 ಕುಟುಂಬಗಳು | 600 ಕುಟುಂಬಗಳು |

**ರಾಷ್ಟ್ರೀಯ ಗ್ರಾಮಾಂತರ** 35,27,300—00 (163 ಕಾಮಗಾರಿಗಳು)

ಉದ್ಯೋಗ ಯೋಜನೆ ರೂ. 29,00,000 (299 ಕಾಮಗಾರಿಗಳು)

**ಸ್ವಯಂ ಉದ್ಯೋಗ ಯೋಜನೆಯಲ್ಲಿ**

| | | |
|---|---|---|
| ತರಬೇತಿ ಪಡೆದವರು | 188 — (ಜನರು) | 40 (ಜನರು) |
| ಜೀತ ವಿಮುಕ್ತರ ಪುನರ್ವಸತಿ | 83 (ಜನರು) | 7 (ಜನರು) |

ಕೊಪ್ಪ.
8-6-1983.

(ಸಹಿ) (ಬಿ.ಜಿ. ಚಿದಂಬರ್)
ಅಧ್ಯಕ್ಷರು,
ತಾಲ್ಲೂಕು ಅಭಿವೃದ್ಧಿ ಮಂಡಳಿ, ಕೊಪ್ಪ.